KA/ BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಫೆಬ್ರವರಿ ೧೦, ೨೦೧೧, ಮಾಘ ೨೧, ಶಕ ವರ್ಷ ೧೯೩೨) | ಸಂಚಿಕೆ ೬ |
|---|---|---|

## ಭಾಗ – ೨

## ನೇಮಕಗಳು, ಸ್ಥಳ ನೇಮಕಗಳು, ವರ್ಗಾವಣೆಗಳು, ರಜೆ ಮತ್ತು ಅಧಿಕಾರಿಗಳು, ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆಗಳು

### ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಲಾ 108 ಎಲ್‌ಎಜಿ 2009, ಬೆಂಗಳೂರು, ದಿನಾಂಕ: 07ನೇ ಜನವರಿ, 2011**

ಶ್ರೀ ಎಂ. ಎಸ್. ನಾವದಗಿ, ವಕೀಲರು, ಇವರನ್ನು ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು 1977ರ ನಿಯಮ 26(2)ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹುದ್ದೆಯ ಕಾರ್ಯಭಾರ ವಹಿಸಿಕೊಳ್ಳುವ ದಿನಾಂಕದಿಂದ ಮೂರು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳ ತಾಲ್ಲೂಕಿನ ಅಪರ ಸರ್ಕಾರಿ ವಕೀಲರನ್ನಾಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಯ್ಯದ್ ಅಬ್ದುಲ್ ನಜೀರ್,**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ಪಿ.ಆರ್. 97**

**ಅಧಿಸೂಚನೆ**

**ಸಂಖ್ಯೆ: ಲಾ 181 ಎಲ್‌ಎಜಿ 2010, ಬೆಂಗಳೂರು, ದಿನಾಂಕ: 06ನೇ ಜನವರಿ, 2011**

ಶ್ರೀಮತಿ ಸವಿತ ಎನ್. ಪಾಟೀಲ್, ಪ್ಲೀಡರ್, ಕರ್ನಾಟಕ ಉಚ್ಚ ನ್ಯಾಯಾಲಯ, ಸಂಚಾರಿ ಪೀಠ, ಧಾರವಾಡ, ಇವರು ತಮ್ಮ ಹುದ್ದೆಗೆ ಸಲ್ಲಿಸಿರುವ ರಾಜೀನಾಮೆಯನ್ನು ದಿನಾಂಕ: 10–11–2010 ರಿಂದಲೇ ಜಾರಿಗೆ ಬರುವಂತೆ ಅಂಗೀಕರಿಸಿ, ಸದರಿ ಹುದ್ದೆಗೆ ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು 1977ರ ನಿಯಮ 23ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹುದ್ದೆಯ ಕಾರ್ಯಭಾರ ವಹಿಸಿಕೊಳ್ಳುವ ದಿನಾಂಕದಿಂದ ಎರಡು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಶ್ರೀ ಆನಂದಕುಮಾರ್ ನವಲ್‌ಗಿಮಠ್, ವಕೀಲರು, ಇವರನ್ನು ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಯ್ಯದ್ ಅಬ್ದುಲ್ ನಜೀರ್,**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ಪಿ.ಆರ್. 98**

**ಅಧಿಸೂಚನೆ**

**ಸಂಖ್ಯೆ: ಲಾ 125 ಎಲ್‌ಸಿಇ 2010, ಬೆಂಗಳೂರು, ದಿನಾಂಕ: 05ನೇ ಜನವರಿ, 2011**

ಕರ್ನಾಟಕ ಕಾನೂನು ಅಧಿಕಾರಿಗಳು (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳು 1977 ನಿಯಮ 26(2)ರ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ದುರ್ಗಪ್ಪ, ಎಂ. ರಂಗನೋರ ಇವರನ್ನು ಯಾದಗಿರಿ 1ನೇ ತ್ವರಿತಗತಿ ನ್ಯಾಯಾಲಯದ ವಿಶೇಷ ಸರ್ಕಾರಿ ಅಭಿಯೋಜಕರಾಗಿ ಕಾರ್ಯಭಾರ ವಹಿಸಿಕೊಳ್ಳುವ ದಿನಾಂಕದಿಂದ ಮೂರು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಕಾತಿ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ. ಎಂ. ಹೊಗಾರ್,**
ಸರ್ಕಾರದ ಉಪ ಕಾರ್ಯದರ್ಶಿ (ಆಡಳಿತ)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ಪಿ.ಆರ್. 99**

## ವಸತಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ವಇ 2 ಕೊಮಂಸೇ 2011, ಬೆಂಗಳೂರು, ದಿನಾಂಕ: 03ನೇ ಜನವರಿ, 2011**

ಶ್ರೀ ಎಂ. ರವೀಂದ್ರಪ್ಪ, ಸೂಪರಿಂಟೆಂಡಿಂಗ್ ಇಂಜಿನಿಯರ್ (ತಾಂತ್ರಿಕ ನಿರ್ದೇಶಕರು) ಇವರನ್ನು ಲೋಕೋಪಯೋಗಿ ಇಲಾಖೆಯಿಂದ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ನಿಯೋಜನೆ ಮೇಲೆ ಮರುಸ್ಥಳ ನಿಯುಕ್ತಿಗೊಳಿಸಲಾಗಿತ್ತು.

ಪ್ರಸ್ತುತ, ಶ್ರೀ ಎಂ. ರವೀಂದ್ರಪ್ಪ, ಸೂಪರಿಂಟೆಂಡಿಂಗ್ ಇಂಜಿನಿಯರ್ (ತಾಂತ್ರಿಕ ನಿರ್ದೇಶಕರು) ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ಇವರ ಸೇವೆಯನ್ನು ಮಂಡಳಿ ಸೇವೆಯಿಂದ ಕೂಡಲೇ ಬಿಡುಗಡೆಗೊಳಿಸಿ ಅವರ ಮಾತೃ ಇಲಾಖೆಯಾದ ಲೋಕೋಪಯೋಗಿ ಇಲಾಖೆಯಲ್ಲಿ ವರದಿ ಮಾಡಿಕೊಳ್ಳುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಆರ್. ನಾಗರಾಜ,**
ಪೀಠಾಧಿಕಾರಿ–4,
ವಸತಿ ಇಲಾಖೆ.

**ಪಿ.ಆರ್. 100**

## ಒಳಾಡಳಿತ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಒಇ 203 ಪಿಪಿಇ 2010, ಬೆಂಗಳೂರು, ದಿನಾಂಕ: 03ನೇ ಜನವರಿ, 2011**

ಶ್ರೀ ಎ.ಎಸ್. ತಮಗೊಂಡ, ಸರ್ಕಾರಿ ಅಭಿಯೋಜಕರು, 1ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಿಜಾಪುರ ಅವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮ 285(1)(ಎ)ರ ಅನ್ವಯ ದಿನಾಂಕ : 05–01–2011 ಅಹರಾಹ್ನದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಸ್ವಯಂ ನಿವೃತ್ತಿ ಹೊಂದಲು ಅನುಮತಿಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಸಿ. ಸಿದ್ದಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ಪಿ.ಆರ್. 101**

## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಾಇ 66 ಎಲ್‌ಎಸ್‌ಐ 2010, ಬೆಂಗಳೂರು, ದಿನಾಂಕ: 28ನೇ ಡಿಸೆಂಬರ್, 2010**

ಡಾ॥ ಕೆ. ಸುಧಾಕರ್, ವಿಮಾ ವೈದ್ಯಾಧಿಕಾರಿ, ಕಾರಾವಿ ಚಿಕಿತ್ಸಾಲಯ, ದಾಸರಹಳ್ಳಿ, ಬೆಂಗಳೂರು ಇವರು ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದಿಂದ ಡಿಪ್ಲೋಮಾ ಇನ್ ಅಬ್‌ಸ್ಟೆಟ್ರಿಕ್ಸ್ ಅಂಡ್ ಗೈನಕಾಲಜಿ (OBG) ವಿಷಯದಲ್ಲಿ ಮೇ 2009ರಂದು ಉನ್ನತ ವ್ಯಾಸಂಗವನ್ನು ಪೂರೈಸಿರುವುದರಿಂದ ಸರ್ಕಾರದ ಆದೇಶ ಸಂಖ್ಯೆ : ಕಾಇ 356 ಎಲ್‌ಎಸ್‌ಐ 95, ದಿನಾಂಕ : 04–09–2006ರ ಕಂಡಿಕೆ ಸಂಖ್ಯೆ : 2ರಲ್ಲಿನ ಅವಕಾಶದಂತೆ ಮೇ 2009 ರಿಂದ ಜಾರಿಗೆ ಬರುವಂತೆ **ಕಿರಿಯ ತಜ್ಞರು** ಎನ್ನುವುದಾಗಿ ಇವರ ಪದನಾಮವನ್ನು ಬದಲಾಯಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಗೋವಿಂದಸ್ವಾಮಿ,**
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ, (ಕಾರಾವಿ ಯೋ (ವೈ) ಸೇವೆಗಳು)

**ಪಿ.ಆರ್. 102**

## ಒಳಾಡಳಿತ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಒಇ 528 ಪೊಸಿಪ 2010, ಬೆಂಗಳೂರು, ದಿನಾಂಕ: 6ನೇ ಜನವರಿ, 2011**

ಎಸ್.ಪಿ (ನಾನ್ ಐಪಿಎಸ್)

ರಾಜ್ಯ ಪೊಲೀಸ್ ಇಲಾಖೆಯ ಈ ಕೆಳಕಂಡ ಸೂಪರಿಂಟೆಂಡೆಂಟ್ ಆಫ್ ಪೊಲೀಸ್ (ನಾನ್ ಐಪಿಎಸ್) ವೃಂದದ ಅಧಿಕಾರಿಗಳು 2011ನೇ ಸಾಲಿನಲ್ಲಿ ಅವರುಗಳ ಹೆಸರುಗಳ ಮುಂದೆ ನಮೂದಿಸಿರುವ ದಿನಾಂಕಗಳಂದು 60 ವರ್ಷಗಳ ವಯೋಮಿತಿಯನ್ನು ಪೂರ್ಣಗೊಳಿಸಲಿದ್ದು, ಸರ್ಕಾರಿ ಸೇವೆಯಿಂದ ವಯೋ ನಿವೃತ್ತಿಯನ್ನು ಹೊಂದಲಿದ್ದಾರೆ.

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು ಮತ್ತು ಪದನಾಮ ಮತ್ತು ಕಾರ್ಯನಿರ್ವಹಿಸುತ್ತಿರುವ ಸ್ಥಳ ಶ್ರೀಯುತರು: | ಜನ್ಮ ದಿನಾಂಕ | ವಯೋನಿವೃತ್ತಿ ಹೊಂದಲಿರುವ ದಿನಾಂಕ |
|---|---|---|---|
| 1 | ಯೋಗಪ್ಪ ಕೆ.ಎನ್.<br>ಪೊಲೀಸ್ ಅಧೀಕ್ಷಕರು, ಸಿ.ಐ.ಡಿ, ಬೆಂಗಳೂರು | 05–01–1951 | 31–01–2011 |

| | | | |
|---|---|---|---|
| 2 | ಪಿ.ನಾಗಿರೆಡ್ಡಿ,<br>ಉಪ ಪ್ರಾಂಶುಪಾಲರು, ಪಿ.ಟಿ.ಸಿ., ಗುಲ್ಬರ್ಗಾ. | 20–01–1951 | 31–01–2011 |
| 3 | ಎಂ.ಎಸ್.ಶಿವಮೂರ್ತಿ,<br>ಪೊಲೀಸ್ ಅಧೀಕ್ಷಕರು,<br>ಕರ್ನಾಟಕ ಲೋಕಾಯುಕ್ತ, ಬಿಜಾಪುರ. | 28–02–1951 | 28–02–2011 |
| 4 | ಜೆ.ಬಿ.ಫರ್ನಾಂಡಿಸ್,<br>ಪೊಲೀಸ್ ಅಧೀಕ್ಷಕರು, ಡಿ.ಸಿ.ಆರ್.ಇ., ಮೈಸೂರು. | 16–02–1951 | 28–02–2011 |
| 5 | ಕುಣಿಗಲ್ ಶ್ರೀಕಂಠ,<br>ಪೊಲೀಸ್ ಅಧೀಕ್ಷಕರು,<br>ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಗ್ರಾಮಾಂತರ | 26–02–1951 | 28–02–2011 |
| 6 | ಎಂ.ಡಿ.ಬಸಣ್ಣವರ,<br>ಪೊಲೀಸ್ ಅಧೀಕ್ಷಕರು,<br>ಎಸ್.ಟಿ.ಎಫ್. (ವಿಶೇಷ ಜಾರಿಕೋಶ), ಬೆಂಗಳೂರು | 10–04–1951 | 30–04–2011 |
| 7<br>* | ಹೆಚ್.ಟಿ.ಕೃಷ್ಣಪ್ಪ,<br>ಪೊಲೀಸ್ ಅಧೀಕ್ಷಕರು,<br>ರಾಜ್ಯ ಗುಪ್ತವಾರ್ತೆ, ಬೆಂಗಳೂರು | 08–04–1951 | 30–04–2011 |
| 8 | ಫಣೀಂದ್ರ ಸಿಂಗ್, ಎ.ಎಸ್.ಪಿ.,<br>ಚಾಮರಾಜನಗರ ಜಿಲ್ಲೆ. | 16–05–1951 | 31–05–2011 |
| 9 | ಯು.ಆರ್.ಪಾಂಗಮ್,<br>ಪೊಲೀಸ್ ಅಧೀಕ್ಷಕರು,<br>ರಾಜ್ಯ ಗುಪ್ತ ವಾರ್ತೆ, ಬೆಳಗಾವಿ | 22–05–1951 | 31–05–2011 |
| 10 | ಕೆ.ಮಂಜುನಾಥ,<br>ಪೊಲೀಸ್ ಅಧೀಕ್ಷಕರು,<br>ಲಾಟರಿ ಮತ್ತು ಸಾರಾಯಿ ನಿಷೇದ ದಳ, ಬೆಂಗಳೂರು | 24–05–1951 | 31–05–2011 |
| 11 | ಕೆ.ಮುಪುರ ರೆಡ್ಡಿ,<br>ಪೊಲೀಸ್ ಅಧೀಕ್ಷಕರು,<br>ಕರ್ನಾಟಕ ಲೋಕಾಯುಕ್ತ, ಚಿಕ್ಕಬಳ್ಳಾಪುರ. | 01–06–1951 | 31–05–2011 |
| 12 | ಬಿ.ಅಂಜನಪ್ಪ, ಎ.ಎಸ್.ಪಿ,<br>ರಾಯಚೂರು ಜಿಲ್ಲೆ | 03–06–1951 | 30–06–2011 |
| 13<br>* | ಎಂ.ಎ.ಸೌದಾಗರ್, ಪೊಲೀಸ್<br>ಅಧೀಕ್ಷಕರು, ಸಿ.ಎಸ್.ಪಿ, ಉಡುಪಿ | 06–06–1951 | 30–06–2011 |
| 14<br>* | ಬಿ.ವಿ.ಯಲ್ಲಪ್ಪ., ಎ.ಎಸ್.ಪಿ, ಗುಲ್ಬರ್ಗಾ | 01–07–1951 | 30–06–2011 |
| 15 | ಜಿ.ಎಂ.ಯಾತನೂರು, ಪೊಲೀಸ್ ಅಧೀಕ್ಷಕರು,<br>ರಾಜ್ಯ ಗುಪ್ತವಾರ್ತೆ, ಗುಲ್ಬರ್ಗಾ. | 01–11–1951 | 31–10–2011 |
| 16 | ಎಂ.ಎ.ಜಯಕುಮಾರ್,<br>ಪೊಲೀಸ್ ಅಧೀಕ್ಷಕರು, ಬೆಸ್ಕಾಂ, ಬೆಂಗಳೂರು | 21–12–1951 | 31–12–2011 |

* ಎಸ್.ಪಿ. ಸಿವಿಲ್ ವೃಂದದ ಕ್ರಮಸಂಖ್ಯೆ: 7,13 & 14ರಲ್ಲಿರುವ ಅಧಿಕಾರಿಗಳ ವಿರುದ್ಧ ಇಲಾಖಾ ವಿಚಾರಣೆ: ಬಾಕಿ ಇರುತ್ತದೆ.

**ಎಸ್.ಪಿ.(ಸಶಸ್ತ್ರ)**

ರಾಜ್ಯ ಪೊಲೀಸ್ ಇಲಾಖೆಯ ಈ ಕೆಳಕಂಡ ಸೂಪರಿಂಟೆಂಡೆಂಟ್ ಆಫ್ ಪೊಲೀಸ್ (ಸಶಸ್ತ್ರ) ವೃಂದದ ಅಧಿಕಾರಿಗಳು 2011ನೇ ಸಾಲಿನಲ್ಲಿ ಅವರುಗಳ ಹೆಸರುಗಳ ಮುಂದೆ ನಮೂದಿಸಿರುವ ದಿನಾಂಕಗಳಂದು 60 ವರ್ಷಗಳ ವಯೋಮಿತಿಯನ್ನು ಪೂರ್ಣಗೊಳಿಸಲಿದ್ದು, ಸರ್ಕಾರಿ ಸೇವೆಯಿಂದ ವಯೋ ನಿವೃತ್ತಿಯನ್ನು ಹೊಂದಲಿದ್ದಾರೆ.

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು ಮತ್ತು ಪದನಾಮ ಮತ್ತು ಕಾರ್ಯನಿರ್ವಹಿಸುತ್ತಿರುವ ಸ್ಥಳ ಶ್ರೀಯುತರು: | ಜನ್ಮ ದಿನಾಂಕ | ವಯೋ ನಿವೃತ್ತಿ ಹೊಂದಲಿರುವ ದಿನಾಂಕ |
|---|---|---|---|
| 1 | ಎಂ.ಬೈಲಪ್ಪ,<br>ಪೊಲೀಸ್ ಅಧೀಕ್ಷಕರು, ಎ.ಟಿ.ಸೆಲ್, ಬೆಂಗಳೂರು | 28–01–1951 | 31–01–2011 |

| | | | |
|---|---|---|---|
| 2 | ಐ.ಎಂ.ದಫೇದಾರ್,<br>ಪೊಲೀಸ್ ಅಧೀಕ್ಷಕರು, ರಾಜ್ಯ ಗುಪ್ತ ವಾರ್ತೆ,<br>ಬೆಂಗಳೂರು | 14–07–1951 | 31–07–2011 |

**ಕಮಾಂಡೆಂಟ್, ಕೆ.ಎಸ್.ಆರ್.ಪಿ.**

ರಾಜ್ಯ ಪೊಲೀಸ್ ಇಲಾಖೆಯ ಈ ಕೆಳಕಂಡ ಕಮಾಂಡೆಂಟ್ ವೃಂದದ ಅಧಿಕಾರಿಯವರು 2011ನೇ ಸಾಲಿನಲ್ಲಿ ಅವರ ಹೆಸರಿನ ಮುಂದೆ ನಮೂದಿಸಿರುವ ದಿನಾಂಕದಂದು 60 ವರ್ಷಗಳ ವಯೋಮಿತಿಯನ್ನು ಪೂರ್ಣಗೊಳಿಸಲಿದ್ದು, ಸರ್ಕಾರಿ ಸೇವೆಯಿಂದ ವಯೋ ನಿವೃತ್ತಿಯನ್ನು ಹೊಂದಲಿದ್ದಾರೆ.

| ಕ್ರಮ ಸಂಖ್ಯೆ | ಅಧಿಕಾರಿ ಹೆಸರು ಮತ್ತು ಪದನಾಮ ಮತ್ತು ಕಾರ್ಯನಿರ್ವಹಿಸುತ್ತಿರುವ ಸ್ಥಳ<br>ಶ್ರೀಯುತರು: | ಜನ್ಮ ದಿನಾಂಕ | ವಯೋನಿವೃತ್ತಿ ಹೊಂದಲಿರುವ ದಿನಾಂಕ |
|---|---|---|---|
| 1 | ಇನಾಯತ್ ಪಾಷ,<br>ಕಮಾಂಡೆಂಟ್, ಇಂಡಿಯಾ ರಿಸರ್ವ್ ಬಟಾಲಿಯನ್,<br>ಮುನಿರಾಬಾದ್, ಕೊಪ್ಪಳ ಜಿಲ್ಲೆ. | 06–05–1951 | 31–05–2011 |
| 2 | ಬಿ.ಸಿ.ಸೋಮಣ್ಣ, ಅಡಿಷನಲ್ ಕಮಾಂಡೆಂಟ್, 11ನೇ ಪಡೆ, ಕೆ.ಎಸ್.ಆರ್.ಪಿ, ಹಾಸನ | 15–11–1951 | 30–11–2011 |

ಈ ಅಧಿಸೂಚನೆಯನ್ವಯ ನಿವೃತ್ತಿ ಹೊಂದಲಿರುವ ಅಧಿಕಾರಿಗಳಿಂದ ಸರ್ಕಾರಕ್ಕೆ ಬರಬೇಕಾದ ಯಾವುದೇ ಬಾಕಿಯನ್ನು ಅವರ ನಿವೃತ್ತಿ ಉಪದಾನದಲ್ಲಿ ತಡೆಹಿಡಿಯುವ ಷರತ್ತಿಗೊಳಪಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ಎನ್. ರವಿಪ್ರಕಾಶ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ಪಿ.ಆರ್. 103**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 134 ಶಿಸನೇ 2010, ಬೆಂಗಳೂರು, ದಿನಾಂಕ: 18ನೇ ಡಿಸೆಂಬರ್, 2010**

ಶ್ರೀ ಸುನೀಲ್ ವಲ್ಲಾಪುರೆ, ಅಧ್ಯಕ್ಷರು, ಡಾ॥ ಡಿ. ಎಂ. ನಂಜುಂಡಪ್ಪ ವರದಿ ಅನುಷ್ಠಾನದ ಉನ್ನತ ಅಧಿಕಾರ ಸಮಿತಿ, ಇವರಿಗೆ ಸಂಪುಟ, ದರ್ಜೆ ಸಚಿವರ ಸ್ಥಾನಮಾನವನ್ನು ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆವಿಗೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ವಿ. ರಾಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ)

**ಪಿ.ಆರ್. 104**

### ಅಧಿಸೂಚನೆ

**ಸಂಖ್ಯೆ: ಸಿಆಸುಇ 29 ಸಅಸೇ 2011, ಬೆಂಗಳೂರು, ದಿನಾಂಕ: 11ನೇ ಜನವರಿ, 2011**

ಅಧಿಸೂಚನೆ ಸಂಖ್ಯೆ: ಆಇ 64 ರಾಲೆಪ 2009, ದಿನಾಂಕ: 06–01–2011ರಲ್ಲಿ ಶ್ರೀ ಮಹಮದ್ ಮನ್ಸೂರ್ ಅಹಮದ್ ಶರೀಫ್, ಮುಖ್ಯ ಲೆಕ್ಕಾಧಿಕಾರಿ, ಜಿಲ್ಲಾ ಪಂಚಾಯತ್, ರಾಮನಗರ ಇವರಿಗೆ ಅಪರ ನಿಯಂತ್ರಕರ ಹುದ್ದೆಗೆ ಸ್ಥಾನಪನ್ನ ಬಡ್ತಿ ಇವರನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ–ಖಾಲಿ ಹುದ್ದೆಗೆ ನೇಮಿಸಲು ಇವರ ಸೇವೆಯನ್ನು ಸಿಆಸು ಇಲಾಖೆ ವಶಕ್ಕೆ ನೀಡಲಾಗಿದೆ. ಇದರನ್ವಯ ಶ್ರೀ ಮಹಮದ್ ಮನ್ಸೂರ್ ಅಹಮದ್ ಶರೀಫ್, ಅಪರ ನಿಯಂತ್ರಕರು, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಆಂತರಿಕ ಆರ್ಥಿಕ ಸಲಹೆಗಾರರು ಮತ್ತು ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ–ಖಾಲಿ ಹುದ್ದೆಗೆ ಮರುಸ್ಥಳ ನಿಯುಕ್ತಿಗೊಳಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್. ವಿಜಯಾನಂದ ಶರ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು–3)

**ಪಿ.ಆರ್. 105**

## ಅಧಿಸೂಚನೆ

**ಸಂಖ್ಯೆ: ಸಿಆಸುಇ 134 ಶಿಸನೇ 2010, ಬೆಂಗಳೂರು, ದಿನಾಂಕ: 12ನೇ ಜನವರಿ, 2011**

ದಿನಾಂಕ: 07–01–2011ರ ಅಧಿಸೂಚನೆ ಸಂ: ಮಮಇ/25/ರಾಮಆ/2010ರಲ್ಲಿ ಶ್ರೀಮತಿ ಸಿ. ಮಂಜುಳ, ಸೀತಾರಾಮ ಕಲ್ಯಾಣ ಮಂಟಪದ ಮುಂಭಾಗ, 2ನೇ ಅಡ್ಡರಸ್ತೆ, ದುರ್ಗಿಗುಡಿ, ಶಿವಮೊಗ್ಗ, ಇವರನ್ನು ಕರ್ನಾಟಕ ರಾಜ್ಯ ಮಹಿಳಾ ಆಯೋಗದ ಅಧ್ಯಕ್ಷರನ್ನಾಗಿ ನೇಮಿಸಿದ್ದು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆವಿಗೆ ರಾಜ್ಯ ಸಚಿವರ ಸ್ಥಾನಮಾನವನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ವಿ. ರಾಮು,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ)

**ಪಿ.ಆರ್. 106**

## ಅಧಿಸೂಚನೆ

**ಸಂಖ್ಯೆ: ಸಿಆಸುಇ 134 ಶಿಸನೇ 2010, ಬೆಂಗಳೂರು, ದಿನಾಂಕ: 13ನೇ ಜನವರಿ, 2011**

ಶ್ರೀ ಕೆ. ದಿವಾಕರ, ಮಾನ್ಯ ಮುಖ್ಯ ಮಂತ್ರಿಯವರ ಸಲಹೆಗಾರರು, ಇವರ ನೇಮಕಾತಿಯನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ರದ್ದುಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿ. ಜಿ. ದಿವಾಕರ್,**
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ರಾಜ್ಯ ಶಿಷ್ಟಾಚಾರ)

**ಪಿ.ಆರ್. 107**

## ಅಧಿಸೂಚನೆ

**ಸಂಖ್ಯೆ: ಸಿಆಸುಇ 134 ಶಿಸನೇ 2010, ಬೆಂಗಳೂರು, ದಿನಾಂಕ: 13ನೇ ಜನವರಿ, 2011**

ದಿನಾಂಕ: 13–01–2011ರ ಅಧಿಸೂಚನೆ ಸಂ: ಸಿಐ 7 ಸಿಎಂಐ 2011ರನ್ವಯ ಶ್ರೀ ಕೆ. ದಿವಾಕರ್, ವಕೀಲರು, ನಂ. 313, "ಬೆನಕಾ" 11ನೇ ಅಡ್ಡರಸ್ತೆ, 17ನೇ ಮುಖ್ಯ ರಸ್ತೆ, ಸ್ವಾತಂತ್ರ್ಯ ಯೋಧರನಗರ, ಬೆಂಗಳೂರು–58, ಇವರನ್ನು ಕರ್ನಾಟಕ ರಾಜ್ಯ ಕೈಗಾರಿಕಾ ಮತ್ತು ಮೂಲಸೌಲಭ್ಯ ಅಭಿವೃದ್ಧಿ ನಿಗಮ ನಿಯಮಿತ (KSIIDC) ಇದರ ಅಧ್ಯಕ್ಷರನ್ನಾಗಿ ನೇಮಿಸಿದ್ದು, ಅವರು ಸದರಿ ಹುದ್ದೆಯ ಕಾರ್ಯಭಾರವನ್ನು ವಹಿಸಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆವಿಗೆ ರಾಜ್ಯ ಸಚಿವರ ಸ್ಥಾನಮಾನವನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿ. ಜಿ. ದಿವಾಕರ್,**
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ)

**ಪಿ.ಆರ್. 108**

## ಅಧಿಸೂಚನೆ

**ಸಂಖ್ಯೆ: ಸಿಆಸುಇ 5 ಎಸ್‌ಐಎಸ್ 2011, ಬೆಂಗಳೂರು, ದಿನಾಂಕ: 17ನೇ ಜನವರಿ, 2011**

ಶ್ರೀ ಮನೋಜ್ ಕುಮಾರ್ ಮೀನ, ಭಾ.ಆ.ಸೇ., ಜಿಲ್ಲಾಧಿಕಾರಿ, ಕೋಲಾರ ಜಿಲ್ಲೆ, ಕೋಲಾರ ಇವರಿಗೆ ದಿನಾಂಕ: 01–02–2011 ರಿಂದ 28–02–2011ರವರೆವಿಗೆ (ಉದಿಸೇ) ಒಟ್ಟು 28 ದಿನಗಳ ಗಳಿಕೆ ರಜೆಯನ್ನು ಮಂಜೂರು ಮಾಡಲಾಗಿದೆ.

ಶ್ರೀ ಮನೋಜ್ ಕುಮಾರ್ ಮೀನ, ಭಾ.ಆ.ಸೇ., ರವರ ರಜಾ ಅವಧಿಯಲ್ಲಿ, ಅಪರ ಜಿಲ್ಲಾಧಿಕಾರಿ, ಕೋಲಾರ ಜಿಲ್ಲೆ, ಕೋಲಾರ ಇವರನ್ನು ಜಿಲ್ಲಾಧಿಕಾರಿ, ಕೋಲಾರ ಜಿಲ್ಲೆ, ಕೋಲಾರ, ಈ ಹುದ್ದೆಯ ಅಧಿಕ ಪ್ರಭಾರದಲ್ಲಿಡಲಾಗಿದೆ.

ಶ್ರೀ ಮನೋಜ್ ಕುಮಾರ್ ಮೀನ, ಭಾ.ಆ.ಸೇ., ರವರು ರಜೆಯ ಮೇಲೆ ಹೋಗಿರದಿದ್ದರೆ ಜಿಲ್ಲಾಧಿಕಾರಿ, ಕೋಲಾರ ಜಿಲ್ಲೆ, ಕೋಲಾರ ಈ ಹುದ್ದೆಯಲ್ಲೇ ಸ್ಥಾನಪನ್ನರಾಗಿರುತ್ತಿದ್ದರೆಂದು ದೃಢೀಕರಿಸಿದೆ.

ಶ್ರೀ ಮನೋಜ್ ಕುಮಾರ್ ಮೀನ, ಭಾ.ಆ.ಸೇ., ರವರಿಗೆ ಮೇಲ್ಕಂಡ ರಜೆ ಅವಧಿಯಲ್ಲಿ ಅವರ ಕುಟುಂಬದ ಈ ಕೆಳಕಾಣಿಸಿದ ಸದಸ್ಯರೊಂದಿಗೆ ಪ್ರಸಕ್ತ **2010–11ರ** ಬ್ಲಾಕ್ ಅವಧಿಯ ಸ್ವಗ್ರಾಮ ಪ್ರಯಾಣ ರಿಯಾಯಿತಿಯನ್ನು ಉಪಯೋಗಿಸಿಕೊಂಡು **ರಾಜಸ್ಥಾನಗೆ** ಹೋಗಿ–ಬರಲು ಅನುಮತಿ ನೀಡಲಾಗಿದೆ.

| ಕ್ರಮ ಸಂಖ್ಯೆ | ಹೆಸರು | ಸಂಬಂಧ |
|---|---|---|
| 1 | ಶ್ರೀ ಮನೋಜ್ ಕುಮಾರ್ ಮೀನ | ಸ್ವತಃ |
| 2 | ಶ್ರೀಮತಿ ಮೀರಾ | ಪತ್ನಿ |
| 3 | ಮ: ಸೌಮಗ್ | ಮಗ |
| 4 | ಕು: ಮಿತ್ವ | ಮಗಳು |

ಸದರಿ ಉದ್ದೇಶಕ್ಕಾಗಿ ತಗಲುವ ವಾಸ್ತವಿಕ ಪ್ರಯಾಣ ವೆಚ್ಚದ ಶೇಕಡ 90ರಷ್ಟು ಹಣವನ್ನು ಅಂತಿಮ ಪ್ರಯಾಣಭತ್ಯೆ ಬಿಲ್ಲಿನಲ್ಲಿ ಹೊಂದಾಣಿಕೆ ಮಾಡುವ ಷರತ್ತಿಗೆ ಒಳಪಟ್ಟು ಮುಂಗಡ ಪ್ರಯಾಣಭತ್ಯೆಯನ್ನು ಪಡೆಯಲು ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಜಿ. ಅನಂತ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–1)

**ಪಿ.ಆರ್. 109**

## PERSONNEL & ADMINISTRATIVE REFORMS SECRETARIAT

### NOTIFICATION

**NO. DPAR 11 SPS 2011, Bangalore, Dated : 14th January, 2011.**

***Shri M.N. Reddi. IPS (KN-84), Additional Director General of Police, CID, Bangalore*** is transferred with immediate effect and his services are placed at the disposal of Home Department for being posted as ***Additional Director General of Police & Executive Director, Karnataka State Police Housing Corporation Ltd, Bangalore*** vice ***Shri. Prem Shankar Meena, IPS*** transferred.

The services of ***Shri Prem Shankar Meena, IPS (KN-84), Additional Director General of Police & Executive Director, Karnataka State Police Housing Corporation Ltd, Bangalore*** are withdrawn from Home Department with immediate effect and he is posted until further orders as ***Additional Director General of Police, CID, Economic Offences, Bangalore*** vice ***Shri. H.C. Krishore Chandra, IPS,*** transferred.

The services of ***Shri N.S. Megharikh, IPS (KN-87), Inspector General of Police, State Human Rights Commission, Bangalore*** are withdrawn from Department of Law, Justice & Human Rights with immediate effect and he is posted until further orders as ***Inspector General of Police, CID, Bangalore*** in the revived cadre post in the IGP grade, vice ***Shri. M.N. Reddi, IPS*** transferred.

By Order and in the Name of the Governor of Karnataka,
**ASHOK P. ATRE,**
Under Secretary to Government,
DP & AR (Services- 4)

**P.R. 110**

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 189 ಬಿಎಂಎಸ್ 2010, ಬೆಂಗಳೂರು, ದಿನಾಂಕ: 6ನೇ ಜನವರಿ, 2011**

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ ಇವರ ಅಧಿಸೂಚನೆ ಸಂಖ್ಯೆ : ಸಿಆಸುಇ 175 ಇಆತ 2010, ದಿನಾಂಕ : 23–11–2010ರಲ್ಲಿ ಮೈಸೂರು ಆಡಳಿತ ತರಬೇತಿ ಸಂಸ್ಥೆಯ ಶ್ರೀ ನಾಗರಾಜ, ಪ್ರಾಚಾರ್ಯರು, ಜಿಲ್ಲಾ ತರಬೇತಿ ಸಂಸ್ಥೆ, ಚಿತ್ರದುರ್ಗ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಇವರನ್ನು ಮೈಸೂರು ರಾಜ್ಯ ನಗರಾಭಿವೃದ್ಧಿ ಸಂಸ್ಥೆಯಲ್ಲಿ ಖಾಲಿ ಇರುವ ಉಪ ನಿರ್ದೇಶಕರ ಹುದ್ದೆಗೆ ನಿಯೋಜನೆ ನೇಮಿಸಲು ಇವರ ಸೇವೆಯನ್ನು ನಗರಾಭಿವೃದ್ಧಿ ಇಲಾಖೆಯ ವಶಕ್ಕೆ ನೀಡಲಾಗಿದೆ.

ಅದರಂತೆ ಶ್ರೀ ನಾಗರಾಜ, ಪ್ರಾಚಾರ್ಯರು, ಜಿಲ್ಲಾ ತರಬೇತಿ ಸಂಸ್ಥೆ, ಚಿತ್ರದುರ್ಗ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಮೈಸೂರು ರಾಜ್ಯ ನಗರಾಭಿವೃದ್ಧಿ ಸಂಸ್ಥೆಯಲ್ಲಿ ಖಾಲಿ ಇರುವ ಉಪ ನಿರ್ದೇಶಕರ ಹುದ್ದೆಗೆ ನಿಯೋಜನೆ ಮೇಲೆ 2 ವರ್ಷದ ಅವಧಿಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಮರು ಸ್ಥಳನಿಯುಕ್ತಿಗೊಳಿಸಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಆರ್. ರವೀಂದ್ರ,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

**ಪಿ.ಆರ್. 111**

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

### ಅನಧಿಕೃತ ಟಿಪ್ಪಣಿ

**ಸಂಖ್ಯೆ: ಅಪಜೀ 121 ಎಫ್‌ಪಿಸಿ 2010, ಬೆಂಗಳೂರು, ದಿನಾಂಕ: 10ನೇ ಜನವರಿ, 2011**

ಶ್ರೀ ರಘುರಾಮ ಭಂಡಾರಿ, ವಿಶೇಷಾಧಿಕಾರಿ (ಬ್ಯಾಂಕಿಂಗ್), ಆರ್ಥಿಕ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, ಬೆಂಗಳೂರು ಇವರನ್ನು ಕರ್ನಾಟಕ ಮೃಗಾಲಯ ಪ್ರಾಧಿಕಾರ, ಮೈಸೂರು ಇದರ ಆಡಳಿತ ಮಂಡಳಿಯ ನಿರ್ದೇಶಕರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ. ಆರ್. ಕಲಾವತಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

**ಪಿ.ಆರ್. 112**

**ಅಧಿಸೂಚನೆ**

**ಸಂಖ್ಯೆ: ಅಪಜೀ 239 ಎಫ್‌ಡಬ್ಲ್ಯೂಎಲ್ 2010, ಬೆಂಗಳೂರು, ದಿನಾಂಕ: 04ನೇ ಜನವರಿ, 2011**

ಕರ್ನಾಟಕ ರಾಜ್ಯ ವನ್ಯಜೀವಿ ಮಂಡಳಿಯ ನಿಯಮಗಳು, 2006ರ ನಿಯಮ 5ರಲ್ಲಿ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ರಾಜ್ಯ ವನ್ಯಜೀವಿ ಮಂಡಳಿಯ ಸದಸ್ಯರಾದ ಶ್ರೀ ಗೋಪಾಲಕೃಷ್ಣ ಬೇಳೂರು, ಮಾಜಿ ಶಾಸಕರು, ಸಾಗರ ಮತ ಕ್ಷೇತ್ರ, ಶಿವಮೊಗ್ಗ ಜಿಲ್ಲೆ ಇವರನ್ನು ರಾಜ್ಯ ವನ್ಯಜೀವಿ ಮಂಡಳಿಯ ಸದಸ್ಯತ್ವದಿಂದ ಈ ಕೂಡಲೇ ಜಾರಿಗೆ ಬರುವಂತೆ ರದ್ದುಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ. ಆರ್. ಕಲಾವತಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

**ಪಿ.ಆರ್. 113**

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಲಾ 74 ಎಲ್‌ಎಜಿ 2009, ಬೆಂಗಳೂರು, ದಿನಾಂಕ: 07ನೇ ಜನವರಿ, 2011**

ಶ್ರೀ ಸುರೇಶ್, ವಕೀಲರು, ಇವರನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ಅಪರ ಜಿಲ್ಲಾ ಸರ್ಕಾರಿ ವಕೀಲರು, ಬೆಂಗಳೂರು(ನಗರ), ಹುದ್ದೆಯ ಕರ್ತವ್ಯಗಳಿಂದ ವಿಮುಕ್ತಿಗೊಳಿಸಿ ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು 1977ರ ನಿಯಮ 26(2)ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹುದ್ದೆಯ ಅಧಿಕಾರ ವಹಿಸಿಕೊಳ್ಳುವ ದಿನಾಂಕದಿಂದ ಮೂರು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಶ್ರೀ ನವೀನ್ ಚಂದ್ರಶೆಟ್ಟಿ, ಇವರನ್ನು ಸದರಿ ಹುದ್ದೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಯ್ಯದ್ ಅಬ್ದುಲ್ ನಜೀರ್,**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ಪಿ.ಆರ್. 114**

**ಅಧಿಸೂಚನೆ**

**ಸಂಖ್ಯೆ: ಲಾ 143 ಎಲ್‌ಎಜಿ 2009, ಬೆಂಗಳೂರು, ದಿನಾಂಕ: 10ನೇ ಜನವರಿ, 2011**

ಶ್ರೀ ಬಸಪ್ಪಪರಪ್ಪ ಧನಶೆಟ್ಟಿ, ವಕೀಲರು, ಇವರನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ಅಪರ ಜಿಲ್ಲಾ ಸರ್ಕಾರಿ ವಕೀಲರು, ಧಾರವಾಡ ಜಿಲ್ಲೆ, ಹುದ್ದೆಯ ಕರ್ತವ್ಯಗಳಿಂದ ವಿಮುಕ್ತಿಗೊಳಿಸಿ ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು 1977ರ ನಿಯಮ 26(2)ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹುದ್ದೆಯ ಅಧಿಕಾರ ವಹಿಸಿಕೊಳ್ಳುವ ದಿನಾಂಕದಿಂದ ಮೂರು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಶ್ರೀ ಶಿವಪ್ಪ ಚಿಕ್ಕಣ್ಣನವರ್, ಇವರನ್ನು ಸದರಿ ಹುದ್ದೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಯ್ಯದ್ ಅಬ್ದುಲ್ ನಜೀರ್,**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ಪಿ.ಆರ್. 115**

**ಅಧಿಸೂಚನೆ**

**ಸಂಖ್ಯೆ: ಲಾ 146 ಎಲ್‌ಎಜಿ 2010, ಬೆಂಗಳೂರು, ದಿನಾಂಕ: 07ನೇ ಜನವರಿ, 2011**

ಶ್ರೀ ಜಿ.ಕೆ. ಭಟ್, ವಕೀಲರು, ಇವರನ್ನು ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳ 1977, ನಿಯಮ 5(3)ರನ್ವಯ ದಿನಾಂಕ : 08–10–2010ರಿಂದ ಜಾರಿಗೆ ಬರುವಂತೆ 2ನೇ ಬಾರಿ ಮೂರು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಂಗಳೂರು ಜಿಲ್ಲೆಯ ಜಿಲ್ಲಾ ಸರ್ಕಾರಿ ವಕೀಲರ ಹುದ್ದೆಯಲ್ಲಿ ಮುಂದುವರೆಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಯ್ಯದ್ ಅಬ್ದುಲ್ ನಜೀರ್,**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ಪಿ.ಆರ್. 116**

## ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಸಂವಾಪ್ರ 75 ಪಿಐಎಫ್ 2010, ಬೆಂಗಳೂರು, ದಿನಾಂಕ: 11ನೇ ಜನವರಿ, 2011**

ಶ್ರೀ ಕಂಠೀರವ ಸ್ಟುಡಿಯೋಸ್ ಲಿಮಿಟೆಡ್‌ನ ನಿಯಮಾವಳಿಗಳ 75(ಎ)ನೇ ಅನುಚ್ಛೇದದನ್ವಯ ಕರ್ನಾಟಕ ಸರ್ಕಾರವು ಡಾ॥ ಮುದ್ದುಮೋಹನ್, ನಿರ್ದೇಶಕರು, ವಾರ್ತಾ ಇಲಾಖೆ, ಬೆಂಗಳೂರು ಇವರನ್ನು ಶ್ರೀ ಕಂಠೀರವ ಸ್ಟುಡಿಯೋಸ್ ಲಿಮಿಟೆಡ್‌ನ ನಿರ್ದೇಶಕರ ಮಂಡಳಿಗೆ ಶ್ರೀ ಎನ್.ಆರ್. ವಿಶುಕುಮಾರ್, ಈ ಹಿಂದಿನ ನಿರ್ದೇಶಕರು, ವಾರ್ತಾ ಇಲಾಖೆ ಇವರ ವರ್ಗಾವಣೆಯಿಂದಾಗಿ ಖಾಲಿಯಾದ ನಿರ್ದೇಶಕರ ಮಂಡಳಿಯಲ್ಲಿನ ನಿರ್ದೇಶಕರ ಸ್ಥಾನಕ್ಕೆ ನಿರ್ದೇಶಕರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮ ನಿರ್ದೇಶನ ಮಾಡಿ ನೇಮಕ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಸುಧಾಕರ ಶೆಟ್ಟಿ,**
ಸರ್ಕಾರದ ಉಪ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ

**ಪಿ.ಆರ್. 117**

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಲಾ 159 ಎಲ್‌ಎಜಿ 2010, ಬೆಂಗಳೂರು, ದಿನಾಂಕ: 12ನೇ ಜನವರಿ, 2011**

ಶ್ರೀ ರಾಜಶೇಖರ, ವಕೀಲರು, ಇವರನ್ನು ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳ 1977, ನಿಯಮ 5(3)ರನ್ವಯ ದಿನಾಂಕ: 01–10–2010 ರಿಂದ ಜಾರಿಗೆ ಬರುವಂತೆ 2ನೇ ಬಾರಿ ಮೂರು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲ್ಲೂಕಿನ ಅಪರ ಸರ್ಕಾರಿ ವಕೀಲರ ಹುದ್ದೆಯಲ್ಲಿ ಮುಂದುವರೆಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಯ್ಯದ್ ಅಬ್ದುಲ್ ನಜೀರ್,**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ಪಿ.ಆರ್. 118**

### ಅಧಿಸೂಚನೆ

**ಸಂಖ್ಯೆ: ಲಾ 13 ಎಲ್‌ಸಿಇ 2010, ಬೆಂಗಳೂರು, ದಿನಾಂಕ: 12ನೇ ಜನವರಿ, 2011**

ಕರ್ನಾಟಕ ಕಾನೂನು ಅಧಿಕಾರಿಗಳು (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳು 1977 ನಿಯಮ 26(2)ರ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಸಂಜಯ್‌ಕುಮಾರ್.ಎಸ್. ಪಾಟೀಲ ಇವರನ್ನು ಬೀದರ್ 1ನೇ ತ್ವರಿತಗತಿ ನ್ಯಾಯಾಲಯದ ವಿಶೇಷ ಸರ್ಕಾರಿ ಅಭಿಯೋಜಕರಾಗಿ ಕಾರ್ಯಭಾರ ವಹಿಸಿಕೊಳ್ಳುವ ದಿನಾಂಕದಿಂದ ಮೂರು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಕಾತಿ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಯ್ಯದ್ ಅಬ್ದುಲ್ ನಜೀರ್,**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ಪಿ.ಆರ್. 119**